# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 673

ಸದಸ್ಯರ ಹೆಸರು : ಡಾ: ವೈ.ಎ.ನಾರಾಯಣಸ್ವಾಮಿ

ಉತ್ತರಿಸ ಬೇಕಾದ ದಿನಾಂಕ : 22-07-2019

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳೆ ಹಾನಿ ಮತ್ತು ಇತರೆ ನೈಸರ್ಗಿಕ ವಿಕೋಪದಿಂದ ಬೆಳೆಗಳು ಹಾನಿಗೆ ಒಳಗಾದಲ್ಲಿ ಸರ್ಕಾರದಿಂದ ಪ್ರತಿ ರೈತರಿಗೆ ನೀಡುತ್ತಿರುವ ಪರಿಹಾರಧನದ ಮೊತ್ತ ಎಷ್ಟು; (ವಿವರಗಳನ್ನು ನೀಡುವುದು) | ಕೇಂದ್ರ ಸರ್ಕಾರದ SDRF/NDRF ಮಾರ್ಗ ಸೂಚಿಯಂತೆ ಬರ ಪರಿಸ್ಥಿತಿಯಿಂದ ಶೇ.33% ಕ್ಕಿಂತ ಹೆಚ್ಚು ಹಾನಿಯಾದ ಕೃಷಿ ಮತ್ತು ತೋಟಗಾರಿಕೆ ಬೆಳೆಗಳಿಗೆ ಪ್ರತಿ ಹೆಕ್ಟೇರ್‌ಗೆ (ಗರಿಷ್ಠ 2 ಹೆಕ್ಟೇರ್‌ಗೆ ಸೀಮಿತಗೊಳಿಸಿ)<br>ಮಳೆಯಾಶ್ರಿತ ಬೆಳೆ – ರೂ.6,800/-<br>ನೀರಾವರಿ ಬೆಳೆ – ರೂ.13,500/-<br>ಬಹು ವಾರ್ಷಿಕ ಬೆಳೆ – ರೂ.18,000/- ದರದಂತೆ Input subsidy ನೀಡಲಾಗುತ್ತಿದೆ. |
| ಆ) | ಈ ರೀತಿ ಬೆಳೆ ನಷ್ಟಕ್ಕೆ ರಾಜ್ಯದಲ್ಲಿ ಕಳೆದ 3 ವರ್ಷಗಳಿಂದ ತೊಂದರೆಗೊಳಗಾಗಿರುವ ರೈತರ ಸಂಖ್ಯೆ ಎಷ್ಟು; ಬೆಳೆ ನಷ್ಟದ ಪ್ರಮಾಣ ಎಷ್ಟು; ಹಾಗೂ ಸರ್ಕಾರದಿಂದ ಬಿಡುಗಡೆಯಾಗಿರುವ ಮತ್ತು ಬಾಕಿ ಉಳಿಸಿಕೊಂಡಿರುವ ಪರಿಹಾರ ಧನದ ಮೊತ್ತ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಬೆಳೆ ನಷ್ಟಕ್ಕೆ Input subsidy ವಿತರಿಸಿದ ವಿವರ ಅನುಬಂಧ-1 ರಲ್ಲಿ ನೀಡಿದೆ.<br>ಪರಿಹಾರ ವಿತರಿಸಲು ಯಾವುದೇ ಪ್ರಕರಣ ಬಾಕಿ ಇರುವುದಿಲ್ಲ. |
| ಇ) | ಪ್ರಧಾನ ಮಂತ್ರಿ ಸುರಕ್ಷಾ ಫಸಲ್ ಬಿಮಾ ಯೋಜನೆಯಡಿ ಬೆಳೆ ವಿಮೆ ಮಾಡಿಸಲು ಅರ್ಜಿ ಸಲ್ಲಿಸಿರುವ ರೈತರ ಸಂಖ್ಯೆ ಎಷ್ಟು; ಇದರಲ್ಲಿ ವಿಮೆ ಪಡೆದ ರೈತರು ಮತ್ತು ಪಡೆದಿರುವ ವಿಮೆಯ ಮೊತ್ತವೆಷ್ಟು; (ವಿವರಗಳು ನೀಡುವುದು) | ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಭೀಮಾ ಯೋಜನೆಯು 2016 ರಿಂದ ಪ್ರಾರಂಭವಾಗಿದ್ದು, ಸದರಿ ಯೋಜನೆಯಡಿ ಬೆಳೆ ವಿಮೆ ಮಾಡಿಸಲು ಅರ್ಜಿ ಸಲ್ಲಿಸಿರುವ ರೈತರ ಸಂಖ್ಯೆ, ವಿಮೆ ಪಡೆದ ರೈತರು ಮತ್ತು ಪಡೆದಿರುವ ವಿಮೆಯ ಮೊತ್ತದ ವಿವರ ಅನುಬಂಧ-2ರಲ್ಲಿ ನೀಡಲಾಗಿದೆ. |

| | | |
|---|---|---|
| ಈ) | ಈ ಯೋಜನೆಯಡಿ ಅರ್ಜಿ ಸಲ್ಲಿಸಿಯೂ ವಿಮೆ ಪಡೆಯದ (ನೀಡದ) ರೈತರ ಸಂಖ್ಯೆ ಎಷ್ಟು; ಇದಕ್ಕೆ ಕಾರಣಗಳೇನು? (ಮಾಹಿತಿ ನೀಡುವುದು) | • ಕರ್ನಾಟಕ ರೈತ ಸುರಕ್ಷಾ ಪ್ರಧಾನಮಂತ್ರಿ ಫಸಲ್ ಭೀಮಾ ಯೋಜನೆಯು ಕ್ಷೇತ್ರಾಧಾರಿತವಾಗಿದ್ದು ಮಾರ್ಗಸೂಚಿಯ ಅನ್ವಯ ಬೆಳೆ ಕಟಾವು ಪ್ರಯೋಗಗಳಿಂದ ಬಂದಂತಹ ವಾಸ್ತವಿಕ ಇಳುವರಿಯು (Average yield) ನಿಗಧಿಪಡಿಸಿದ ಪ್ರಾರಂಭಿಕ ಇಳುವರಿಗಿಂತ (Historical yield) ಕಡಿಮೆ ಇದ್ದರೆ, ಇಳುವರಿಯ ಕೊರತೆಗೆ ಅನುಗುಣವಾಗಿ ಬೆಳೆ ವಿಮೆಗೆ ನೋಂದಾಯಿಸಿದ ರೈತರು ಬೆಳೆ ವಿಮಾ ನಷ್ಟ ಪರಿಹಾರ ಪಡೆಯಲು ಅರ್ಹರಾಗುತ್ತಾರೆ.<br>• ನೋಂದಣಿಯಾಗಿಯೂ ವಿಮೆ ಪರಿಹಾರಕ್ಕೆ ಅರ್ಹರಾಗದಿರಲು ಕಾರಣವೇನೆಂದರೆ ಸಂಬಂಧಿಸಿದ ವಿಮಾ ಘಟಕದಲ್ಲಿ ವಾಸ್ತವಿಕ ಇಳುವರಿಯು (CCE yield) ಪ್ರಾರಂಭಿಕ ಇಳುವರಿಗಿಂತ (Threshold yield) ಹೆಚ್ಚಿಗೆ ಇದ್ದರೆ, ಇಳುವರಿ ಆಧಾರಿತ (CCE Compensation) ವಿಮೆ ಪರಿಹಾರ ಮೊತ್ತ ದೊರಕುವುದಿಲ್ಲ. |

**ಸಂ:ಕೃಇ/47/ಕೃಉಇ/2019**

(ಎನ್.ಹೆಚ್.ಶಿವಶಂಕರ ರೆಡ್ಡಿ)
ಕೃಷಿ ಸಚಿವರು